ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 23 (175) |
| ಮಾನ್ಯ ಸದಸ್ಯರ ಹೆಸರು | ಶ್ರೀ ಆರ್ ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 07-12-2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮತ್ತು ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಸರ್ಕಾರಿ ಆಸ್ಪತ್ರೆಗಳಲ್ಲಿ ವೈದ್ಯಾಧಿಕಾರಿಗಳ ಕೊರತೆಯಿಂದ ಸಾರ್ವಜನಿಕರಿಗೆ ಅನಾನುಕೂಲವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; | ಬಂದಿದೆ.<br>ರಾಜ್ಯದಲ್ಲಿ ಖಾಲಿ ಇರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ/ ದಂತ ಆರೋಗ್ಯಾಧಿಕಾರಿ/ತಜ್ಞ ವೈದ್ಯರ ಹುದ್ದೆಗಳನ್ನು ವಿಶೇಷ ನೇರ ನೇಮಕಾತಿ ನಿಯಮಗಳ ಮೂಲಕ ಭರ್ತಿ ಮಾಡುವ ಪ್ರಕ್ರಿಯೆ ಚಾಲನೆಯಲ್ಲಿದೆ. |
| ಆ | ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ವೈದ್ಯರುಗಳನ್ನು ನೇಮಕಾತಿ ಮಾಡಲು ಸರ್ಕಾರ ಕೈಗೊಂಡಕ್ರಮಗಳೇನು: | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲು ಸರ್ಕಾರಿ ಆದೇಶ ಸಂಖ್ಯೆ: ಆಕುಕ 297 ಹೆಚ್‌ಎಸ್‌ಹೆಚ್ 2015, ದಿನಾಂಕ: 22-04-2016 ಹಾಗೂ ಆಕುಕ 359 ಹೆಚ್‌ಎಸ್‌ಹೆಚ್ 2016, ದಿನಾಂಕ: 01-08-2016 (ಎಂಬಿಬಿಎಸ್ ವೈದ್ಯಾಧಿಕಾರಿಗಳ ಹುದ್ದೆಗೆ ಎದುರು ಆಯುಷ್ ವೈದ್ಯರ ನೇಮಕಾತಿ) ಹಾಗೂ ತಜ್ಞ ವೈದ್ಯರನ್ನು **"On Call Basis"** ಮೇಲೆ ತೆಗೆದುಕೊಳ್ಳಲು ಸರ್ಕಾರದ ಆದೇಶ ಸಂಖ್ಯೆ:ಆಕುಕ 178 ಹೆಚ್‌ಎಸ್‌ಹೆಚ್ 2011 ದಿನಾಂಕ: 20-05-2016ರಲ್ಲಿ ಮತ್ತು ಸರ್ಕಾರದ ಆದೇಶ ಸಂಖ್ಯೆ: ಆಕುಕ 554 ಹೆಚ್‌ಎಸ್‌ಹೆಚ್ 2016, ದಿನಾಂಕ: 22-11-2016 ರಲ್ಲಿ ಸೂಚಿತವಾದಂತೆ ತಜ್ಞ ವೈದ್ಯರುಗಳ ಎದುರು ಹುದ್ದೆಯಲ್ಲಿ ಎಂಬಿಬಿಎಸ್ ವೈದ್ಯರನ್ನು ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲು ಆಯುಕ್ತರು, ಆರೋಗ್ಯ ಮತ್ತು ಕು.ಕ ಸೇವೆಗಳು, ಬೆಂಗಳೂರು ಸುತ್ತೋಲೆ ಸಂಖ್ಯೆ: ಜೆಆರ್‌ಓ(1ಎ)/101/2012-13, ದಿನಾಂಕ: 09-12-2016 ರಂತೆ ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು/ ಜಿಲ್ಲಾ ಆಕುಕ ಅಧಿಕಾರಿಗಳಿಗೆ ಅನುಮತಿ ನೀಡಲಾಗಿದೆ.<br>ಹಾಲಿ ಇಲಾಖೆಯಲ್ಲಿ 472 ವೈದ್ಯರು (ಎಂಬಿಬಿಎಸ್), 259 ಆಯುಷ್ ವೈದ್ಯರು ಮತ್ತು 63 ದಂತ ವೈದ್ಯರುಗಳನ್ನು ಷರತ್ತು / ನಿಬಂಧನೆಗಳನ್ವಯ ಗುತ್ತಿಗೆ ಆಧಾರ ಮೇಲೆ ನೇಮಕ ಮಾಡಿಕೊಳ್ಳಲಾಗಿದೆ. |
| ಇ | ಎಲ್ಲಾ ಜಿಲ್ಲಾ ಮತ್ತು ತಾಲ್ಲೂಕು ಆಸ್ಪತ್ರೆಗಳಲ್ಲಿ ತಜ್ಞ ವೈದ್ಯರುಗಳನ್ನು (ಚರ್ಮ, ಮೂಳೆ ಸ್ತ್ರೀ ರೋಗ ಮುಂತಾದ) ನೇಮಕ ಮಾಡಲಾಗಿದೆಯೇ: ಮಾಡದಿದ್ದರೆ ಯಾವ ಅವಧಿಯಲ್ಲಿ ನೇಮಕ ಮಾಡಿಕೊಳ್ಳಲಾಗುವುದು? | ರಾಜ್ಯದಲ್ಲಿ ಖಾಲಿ ಇರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ/ ದಂತ ಆರೋಗ್ಯಾಧಿಕಾರಿ/ತಜ್ಞ ವೈದ್ಯರ ಹುದ್ದೆಗಳನ್ನು ವಿಶೇಷ ನೇರ ನೇಮಕಾತಿ ನಿಯಮಗಳ ಮೂಲಕ ಭರ್ತಿಮಾಡಲು ಅರ್ಹ ಅಭ್ಯರ್ಥಿಗಳಿಂದ ದಿನಾಂಕ: 10.09.2020 ರಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದ್ದು, ನೇಮಕಾತಿ ಪ್ರಕ್ರಿಯೆ ಚಾಲನೆಯಲ್ಲಿದೆ. |

ಆಕುಕ 71 ಹೆಚ್‌ಎಸ್‌ಡಿ 2020

(ಡಾ|| ಕೆ ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು